WPP-47/2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೬ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೯, ೨೦೧೧ (ಆಶ್ವಯುಜ ೭, ಶಕ ವರ್ಷ ೧೯೩೩) | ಸಂಚಿಕೆ ೩೯ |
|---|---|---|


## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಆಇ 10 ಸಾಂಹಅ 2011, ಬೆಂಗಳೂರು, ದಿನಾಂಕ:19.03.2011**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಎಫ್‌ಡಿ 1 ಬಿಇಪಿ 2008 ದಿನಾಂಕ:19.09.2008ರಲ್ಲಿ ಕಾವೇರಿ ಕಲ್ಪತರು ಗ್ರಾಮೀಣ ಬ್ಯಾಂಕಿನ ನಿರ್ದೇಶಕರ ಮಂಡಳಿಗೆ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ, ಜಿಲ್ಲಾಪಂಚಾಯತ್, ಮೈಸೂರು ಜಿಲ್ಲೆ ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾಪಂಚಾಯತ್, ಚಾಮರಾಜನಗರ ಜಿಲ್ಲೆ ಇವರನ್ನು ದಿನಾಂಕ:19.09.2008 ರಿಂದ 2 ವರ್ಷಗಳ ಅವಧಿಗೆ ರಾಜ್ಯದ ನಾಮನಿರ್ದೇಶಿತ ನಿರ್ದೇಶಕರುಗಳನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿತ್ತು.

ಪ್ರಾದೇಶಿಕ ಗ್ರಾಮೀಣ ಬ್ಯಾಂಕ್‌ಗಳ ಅಧಿನಿಯಮ 1976ರ ಸೆಕ್ಷನ್ 9(1)(ಇ) ಮತ್ತು ಸೆಕ್ಷನ್ 10ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಗೆ ನಮೂದಿಸಿರುವ ಅಧಿಕಾರಿಗಳನ್ನು ಮೈಸೂರಿನ ಕಾವೇರಿ ಕಲ್ಪತರು ಗ್ರಾಮೀಣ ಬ್ಯಾಂಕಿನ ಮಂಡಳಿಯ ನಿರ್ದೇಶಕರುಗಳನ್ನಾಗಿ ಈ ಅಧಿಸೂಚನೆಯ ದಿನಾಂಕದಿಂದ 2 ವರ್ಷಗಳ ಅವಧಿಗೆ ನಾಮನಿರ್ದೇಶನ ಮಾಡಲಾಗಿದೆ.

| ಕ್ರ. ಸಂ. | ಪ್ರಾದೇಶಿಕ ಗ್ರಾಮೀಣ ಬ್ಯಾಂಕಿನ ಹೆಸರು | ಬ್ಯಾಂಕಿನ ನಿರ್ದೇಶಕರ ಮಂಡಳಿಗೆ ನಾಮನಿರ್ದೇಶನಗೊಂಡ ಅಧಿಕಾರಿಗಳು |
|---|---|---|
| 1. | ಕಾವೇರಿ ಕಲ್ಪತರು ಗ್ರಾಮೀಣ ಬ್ಯಾಂಕ್, ಮೈಸೂರು | 1) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾಪಂಚಾಯತ್, ಮೈಸೂರು ಜಿಲ್ಲೆ.<br>2) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾಪಂಚಾಯತ್, ಚಾಮರಾಜನಗರ ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭವಾನಿ ದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಾಂಸ್ಥಿಕ ಹಣಕಾಸು)

ಪಿ.ಆರ್.278

## ಆರ್ಥಿಕ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ:ಆಇ 335 ವೆಚ್ಚ–12/11, ಬೆಂಗಳೂರು, ದಿನಾಂಕ:30.03.2011

ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರುರವರ ಕಛೇರಿಯ ಆಧುನೀಕರಣಕ್ಕಾಗಿ ರೂ.19.75 ಲಕ್ಷಗಳ ವೆಚ್ಚದಲ್ಲಿ ಬೆಂಗಳೂರು, ನಿರ್ಮಿತಿ ಕೇಂದ್ರ, ಈ ಸಂಸ್ಥೆಗೆ ನೇರವಾಗಿ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ನಿರ್ಮಿತಿ ಕೇಂದ್ರವು ಈ ಆಧುನೀಕರಣ ಕಾರ್ಯವನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ. ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು. ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಶೇಖರಪ್ಪ**

ಪಿ.ಆರ್.336

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

## ಆರ್ಥಿಕ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ:ಆಇ 347 ವೆಚ್ಚ–12/11, ಬೆಂಗಳೂರು, ದಿನಾಂಕ:18.04.2011

ಸರ್ಕಾರದ ವಿವಿಧ ಇಲಾಖೆಗಳ ಕಾಮಗಾರಿಗಳನ್ನು ಕೈಗೊಳ್ಳುವ ಸಂದರ್ಭದಲ್ಲಿ ಪರಿಸರ ಪ್ರೇಮಿ ಅಥವಾ ಕ್ರಯ ಪರಿಣಾಮಕಾರಿ ತಂತ್ರಜ್ಞಾನ ಅಥವಾ ನವೀನ ಕಟ್ಟಡ ನಿರ್ಮಾಣ ಸಾಮಗ್ರಿಗಳು ಅಥವಾ ಮೊದಲೇ ಅಚ್ಚು ಹಾಕಿದ ತಂತ್ರಜ್ಞಾನ ಇವುಗಳಲ್ಲಿ ಅಳವಡಿಸಲು ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ನೇರವಾಗಿ ನಿರ್ಮಿತಿ ಕೇಂದ್ರಕ್ಕೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು 2011–12ನೇ ಸಾಲಿಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ನಿರ್ಮಿತಿ ಕೇಂದ್ರವು ಕಾಮಗಾರಿಗಳನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ. ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು. ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಸಂಬಂಧಿತ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಶೇಖರಪ್ಪ**

ಪಿ.ಆರ್.366

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

## ಆರ್ಥಿಕ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ:ಆಇ 294 ವೆಚ್ಚ–12/11, ಬೆಂಗಳೂರು, ದಿನಾಂಕ:26.04.2011

ದಿನಾಂಕ: 11.03.2011 ರಿಂದ 13.03.2011ರವರೆಗೆ ಬೆಳಗಾವಿಯಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನದಲ್ಲಿ ರಾಜ್ಯ ಅತಿಥಿಯಾಗಿ ಭಾಗವಹಿಸಿದ ಶ್ರೀಮತಿ ಐಶ್ವರ್ಯ ರೈ ಬಚ್ಚನ್ ಹಾಗೂ ಸಂಗಡಿಗರು ಬಂದು ಕಾರ್ಯಕ್ರಮದಲ್ಲಿ ಭಾಗವಹಿಸಲು ಹೋಗಲು 8 ಆಸನಗಳುಳ್ಳ ವಿಮಾನವನ್ನು ರೂ.9,67,883/– ವೆಚ್ಚದಲ್ಲಿ ನೇರವಾಗಿ ಚಿಪ್ಸನ್ ಏವಿಯೇಷನ್ ಸಂಸ್ಥೆ, ಮುಂಬೈ, ಇವರಿಂದ ಪಡೆದಿದ್ದಕ್ಕೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಸಿ.ಆ.ಸು.ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಶೇಖರಪ್ಪ**

ಪಿ.ಆರ್.414

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ:ನಅಇ 65 ಬೆಂರೂಪ್ರಾ 2011, ಬೆಂಗಳೂರು, ದಿನಾಂಕ:01.06.2011

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 2(7)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಕರ್ನಾಟಕ ಸರ್ಕಾರವು ದಾವಣಗೆರೆ ಜಿಲ್ಲೆ, ಚನ್ನಗಿರಿ ಪಟ್ಟಣ ಪಂಚಾಯಿತಿ ಗಡಿಯ ಕ್ಷೇತ್ರವನ್ನೇ ಚನ್ನಗಿರಿ ಸ್ಥಳೀಯ ಯೋಜನಾ

ಪ್ರದೇಶವೆಂದು ದಿನಾಂಕ:01.06.2011 ರಿಂದ ಜಾರಿಗೆ ಬರುವಂತೆ ಈ ಮೂಲಕ ಘೋಷಿಸಿದೆ. ಸದರಿ ಪಟ್ಟಣ ಪಂಚಾಯಿತಿಯೇ ಯೋಜನಾ ಪ್ರಾಧಿಕಾರದ ಕೆಲಸ ಕಾರ್ಯಗಳನ್ನು ನಿರ್ವಹಿಸತಕ್ಕದೆಂದು ಆದೇಶಿಸಿದೆ.

ಅನುಬಂಧ–1ರಲ್ಲಿ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳ ವಿವರಗಳನ್ನು ಹಾಗೂ ಅನುಬಂಧ–2ರಲ್ಲಿ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರಗಳನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ಅನುಬಂಧ–1**

ಪ್ರಸ್ತಾವಿಕ ಸ್ಥಳೀಯ ಯೋಜನಾ ಪ್ರದೇಶ ವ್ಯಾಪ್ತಿಯಲ್ಲಿನ ಗ್ರಾಮಗಳು ಹಾಗೂ ರಿ.ಸ.ನಂ.ಗಳ ವಿವರ

| ಕ್ರ. ಸಂ. | ಗ್ರಾಮಗಳು | ಸರ್ವೆ ನಂಬರುಗಳ ವಿವರ |
|---|---|---|
| 1. | ಚನ್ನಗಿರಿ | ಚನ್ನಗಿರಿ ಗ್ರಾಮ ಠಾಣ ಹಾಗೂ ಸಂಪೂರ್ಣ ಕಂದಾಯ ಗ್ರಾಮ (ರಿ.ಸ.ನಂ.1 ರಿಂದ 152) |

ನಅಇ 65 ಬೆಂರೂಪ್ರಾ 2011

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ಅನುಬಂಧ–II**

**ದಾವಣಗೆರೆ ಜಿಲ್ಲೆ ಚನ್ನಗಿರಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರಣೆ**

ದಾವಣಗೆರೆ ಜಿಲ್ಲೆ, ಚನ್ನಗಿರಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯು ಪಶ್ಚಿಮದಲ್ಲಿ ಶಿವಮೊಗ್ಗ ರಸ್ತೆ ಹಾಗೂ ಚನ್ನಗಿರಿ ಪಟ್ಟಣದ ರಿ.ಸ.ನಂ.3ರ ಪಶ್ಚಿಮ ಗಡಿ ಸೇರುವ ಬಿಂದುವಿನಿಂದ ಪ್ರಾರಂಭವಾಗಿ ರಿ.ಸ.ನಂ.3ರ ಪಶ್ಚಿಮ ಗಡಿಯಲ್ಲಿ ಉತ್ತರಾಭಿಮುಖವಾಗಿ ಚಲಿಸಿ ಚಿಕ್ಕ ಹುಲಿಕೆರೆ ರಸ್ತೆಯನ್ನು ದಾಟಿಕೊಂಡು ರಿ.ಸ.ನಂ.5ರ ಪಶ್ಚಿಮ ಗಡಿಯಲ್ಲಿ ಉತ್ತರಾಭಿಮುಖವಾಗಿ ಚಲಿಸಿ ನಂತರ ಇದೇ ರಿ.ಸ.ನಂ. 5ರ ಉತ್ತರಗಡಿಯಲ್ಲಿ ಪೂರ್ವಭಿಮುಖವಾಗಿ ಚಲಿಸಿ ನಂತರ ರಿ.ಸ.ನಂ.6ರ ಉತ್ತರ ಗಡಿಯಲ್ಲಿ ಪೂರ್ವಭಿಮುಖವಾಗಿ ಚಲಿಸಿ ಮುದ್ದೇನಹಳ್ಳಿ ರಸ್ತೆಯನ್ನು ದಾಟಿಕೊಂಡು ರಿ.ಸ.ನಂ.6, 9, 10 ಹಾಗೂ 16ರ ಉತ್ತರ ಗಡಿಗಳಲ್ಲಿ ಪೂರ್ವಾಭಿಮುಖವಾಗಿ ಚಲಿಸಿ ಮುದ್ದೇನಹಳ್ಳಿ ರಸ್ತೆಯನ್ನು ದಾಟಿಕೊಂಡು ರಿ.ಸ.ನಂ.17 ಉತ್ತರ ಗಡಿಯಲ್ಲಿ ಪೂರ್ವಾಭಿಮುಖವಾಗಿ ಚಲಿಸಿ ರಿ.ಸ.ನಂ.28ರ ಪಶ್ಚಿಮ ಗಡಿಯನ್ನು ತಲುಪುತ್ತದೆ. ನಂತರ ಈ ಬಿಂದುವಿನಿಂದ ಪ್ರಾರಂಭವಾಗಿ ರಿ.ಸ.ನಂ.28, 34 ಹಾಗೂ ರಿ.ಸ.ನಂ.35ರ ಪಶ್ಚಿಮ ಗಡಿಗಳಲ್ಲಿ ಉತ್ತರಾಭಿಮುಖವಾಗಿ ಚಲಿಸಿ ನಂತರ ರಿ.ಸ.ನಂ. 35ರ ಉತ್ತರ ಗಡಿಯಲ್ಲಿ ಪೂರ್ವಾಭಿಮುಖವಾಗಿ ಚಲಿಸಿ ಬನ್ನಿಹಟ್ಟಿ ರಸ್ತೆಯನ್ನು ದಾಟಿಕೊಂಡು ರಿ.ಸ.ನಂ. 36ರ ಉತ್ತರ ಗಡಿಯಲ್ಲಿ ಪೂರ್ವಾಭಿಮುಖವಾಗಿ ಚಲಿಸಿ ರಿ.ಸ.ನಂ.37ರ ವಾಯುವ್ಯ ಮೂಲೆಯನ್ನು ತಲುಪುತ್ತದೆ. ನಂತರ ಈ ಬಿಂದುವಿನಿಂದ ಪ್ರಾರಂಭಿಸಿ ರಿ.ಸ.ನಂ.38ರ ಪಶ್ಚಿಮ ಗಡಿಯಲ್ಲಿ ಪೂರ್ವಾಭಿಮುಖವಾಗಿ ನಂತರ ಉತ್ತರಾಭಿಮುಖವಾಗಿ ಚಲಿಸಿ ಇದೇ ರಿ.ಸ.ನಂ.38ರ ಉತ್ತರಗಡಿಯಲ್ಲಿ ಪೂರ್ವಾಭಿಮುಖವಾಗಿ ಚಲಿಸಿ, ಪೂರ್ವ ಗಡಿಯಲ್ಲಿ ದಕ್ಷಿಣಾಭಿಮುಖವಾಗಿ ಹಾಗೂ ಪೂರ್ವಾಭಿಮುಖವಾಗಿ ಚಲಿಸಿ ನಂತರ ಇದೇ ರಿ.ಸ.ನಂ.38ರ ಪೂರ್ವಗಡಿಯಲ್ಲಿ ದಕ್ಷಿಣಾಭಿಮುಖವಾಗಿ ಚಲಿಸಿ ರಿ.ಸ.ನಂ.39ರ ಉತ್ತರಗಡಿಯನ್ನು ತಲುಪುತ್ತದೆ.

ನಂತರ ಈ ಬಿಂದುವಿನಿಂದ ಪ್ರಾರಂಭವಾಗಿ ರಿ.ಸ.ನಂ.39, 40, 41, 44 ಹಾಗೂ ರಿ.ಸ.ನಂ.45ರ ಪೂರ್ವಗಡಿಗಳಲ್ಲಿ ದಕ್ಷಿಣಾಭಿಮುಖವಾಗಿ ಚಲಿಸಿ ಮಾರೇನಹಳ್ಳಿ ರಸ್ತೆಯನ್ನು ದಾಟಿಕೊಂಡು ರಿ.ಸ.ನಂ.47ರ ಪೂರ್ವಗಡಿಯಲ್ಲಿ ದಕ್ಷಿಣಾಭಿಮುಖವಾಗಿ ಚಲಿಸಿ ರಿ.ಸ.ನಂ.48ರ ಉತ್ತರ ಗಡಿಯಲ್ಲಿ ಪೂರ್ವಾಭಿಮುಖವಾಗಿ ಚಲಿಸಿ ನಂತರ ಇದೇ ರಿ.ಸ.ನಂ.48 ಹಾಗೂ 54ರ ಪೂರ್ವ ಗಡಿಗಳಲ್ಲಿ ದಕ್ಷಿಣಾಭಿಮುಖವಾಗಿ ಚಲಿಸಿ ಚಿತ್ರದುರ್ಗ ರಸ್ತೆಯನ್ನು ದಾಟಿಕೊಂಡು ರಿ.ಸ.ನಂ.55ರ ಪೂರ್ವಗಡಿಯಲ್ಲಿ ದಕ್ಷಿಣಾಭಿಮುಖವಾಗಿ, ದಕ್ಷಿಣ ಗಡಿಯಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸಿ ರಿ.ಸ.ನಂ.56ರ ಪೂರ್ವ ಗಡಿಯನ್ನು ತಲುಪುತ್ತದೆ. ನಂತರ ಈ ಬಿಂದುವಿನಿಂದ ಪ್ರಾರಂಭವಾಗಿ ರಿ.ಸ.ನಂ.56 ಹಾಗು 60ರ ಪೂರ್ವಗಡಿಗಳಲ್ಲಿ ದಕ್ಷಿಣಾಭಿಮುಖವಾಗಿ ಚಲಿಸಿ ಅಜ್ಜಂಪುರ ರಸ್ತೆಯನ್ನು ದಾಟಿಕೊಂಡು ರಿ.ಸ.ನಂ.61 ಹಾಗೂ 62ರ ಪೂರ್ವಗಡಿಗಳಲ್ಲಿ ದಕ್ಷಿಣಾಭಿಮುಖವಾಗಿ ಚಲಿಸಿ ನಂತರ ರಿ.ಸ.ನಂ.62ರ ದಕ್ಷಿಣ ಗಡಿಯಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸಿ ದಿಗ್ಗೆನಹಳ್ಳಿ ರಸ್ತೆಯನ್ನು ದಾಟಿಕೊಂಡು ರಿ.ಸ.ನಂ.63 ಹಾಗೂ 66ರ ದಕ್ಷಿಣ ಗಡಿಗಳಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸಿ, ರಿ.ಸ.ನಂ.66ರ ಪಶ್ಚಿಮ ಗಡಿಯಲ್ಲಿ ಉತ್ತರಾಭಿಮುಖವಾಗಿ ಚಲಿಸಿ ರಿ.ಸ.ನಂ.67ರ ದಕ್ಷಿಣ ಗಡಿಯನ್ನು ತಲುಪುತ್ತದೆ. ನಂತರ ಬಿಂದುವಿನಿಂದ ಪ್ರಾರಂಭವಾಗಿ ರಿ.ಸ.ನಂ.67 ಹಾಗೂ 101ರ ದಕ್ಷಿಣ ಗಡಿಯಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸಿ ದಿಗ್ಗೇನಹಳ್ಳಿ ರಸ್ತೆಯನ್ನು ದಾಟಿಕೊಂಡು ರಿ.ಸ.ನಂ.101 ಹಾಗೂ 102ರ ದಕ್ಷಿಣ ಗಡಿಯಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸಿ ರಿ.ಸ.ನಂ.108ರ ಪೂರ್ವಗಡಿಯನ್ನು ತಲುಪುತ್ತದೆ. ನಂತರ ಈ ಬಿಂದುವಿನಿಂದ

ಪ್ರಾರಂಭವಾಗಿ ದಿಗ್ಗೇನಹಳ್ಳಿ ರಸ್ತೆಯನ್ನು ಪಶ್ಚಿಮಾಭಿಮುಖವಾಗಿ ದಾಟಿಕೊಂಡು ರಿ.ಸ.ನಂ.108, 109ರ ಪೂರ್ವಗಡಿಗಳಲ್ಲಿ ದಕ್ಷಿಣಾಭಿಮುಖವಾಗಿ ಚಲಿಸಿ ನಂತರ ರಿ.ಸ.ನಂ.109 ಹಾಗೂ 110ರ ದಕ್ಷಿಣ ಗಡಿಗಳಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸಿ ನಂತರ ರಿ.ಸ.ನಂ.110, 111 ಹಾಗೂ 112ರ ಪಶ್ಚಿಮ ಗಡಿಗಳಲ್ಲಿ ಉತ್ತರಾಭಿಮುಖವಾಗಿ ಚಲಿಸಿ ರಿ.ಸ.ನಂ. 129ರ ದಕ್ಷಿಣ ಗಡಿಯನ್ನು ತಲುಪುತ್ತದೆ. ನಂತರ ಈ ಬಿಂದುವಿನಿಂದ ಪ್ರಾರಂಭವಾಗಿ ಇದೇ ರಿ.ಸ.ನಂ. 129ರ ದಕ್ಷಿಣ ಗಡಿಯಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸಿ ರಿ.ಸ.ನಂ.130ರ ಪೂರ್ವಗಡಿಯಲ್ಲಿ ದಕ್ಷಿಣಾಭಿಮುಖವಾಗಿ ಚಲಿಸಿ ಚಿಕ್ಕಹುಲಿಕೆರೆ ರಸ್ತೆಯನ್ನು ದಾಟಿಕೊಂಡು ಪುನಃ ರಿ.ಸ.ನಂ.130ರ ಪೂರ್ವ ಗಡಿಯಲ್ಲಿ ದಕ್ಷಿಣಾಭಿಮುಖವಾಗಿ ಚಲಿಸಿ, ದಕ್ಷಿಣ ಗಡಿಯಲ್ಲಿ ಪಶ್ಚಿಮಾಭಿಮುಖವಾಗಿ, ಪಶ್ಚಿಮ ಗಡಿಯಲ್ಲಿ ಉತ್ತರಾಭಿಮುಖವಾಗಿ ಚಲಿಸಿ, ರಿ.ಸ.ನಂ.131ರ ದಕ್ಷಿಣ ಗಡಿಯನ್ನು ತಲುಪುತ್ತದೆ. ನಂತರ ಈ ಬಿಂದುವಿನಿಂದ ಪ್ರಾರಂಭವಾಗಿ ರಿ.ಸ.ನಂ.131ರ ದಕ್ಷಿಣ ಗಡಿಯಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸಿ, ಪಶ್ಚಿಮಗಡಿಯಲ್ಲಿ ಉತ್ತರಾಭಿಮುಖವಾಗಿ ಚಲಿಸಿ ಲಕ್ಷ್ಮಿಸಾಗರ ರಸ್ತೆಯನ್ನು ದಾಟಿಕೊಂಡು ರಿ.ಸ.ನಂ. 132, 133 ಹಾಗೂ 136ರ ಪಶ್ಚಿಮ ಗಡಿಯಲ್ಲಿ ಉತ್ತರಾಭಿಮುಖವಾಗಿ ಚಲಿಸಿ ರಿ.ಸ.ನಂ.140ರ ದಕ್ಷಿಣ ಗಡಿಯನ್ನು ತಲುಪುತ್ತದೆ. ನಂತರ ಈ ಬಿಂದುವಿನಿಂದ ಪ್ರಾರಂಭವಾಗಿ ರಿ.ಸ.ನಂ.140ರ ಪಶ್ಚಿಮ ಗಡಿಯಲ್ಲಿ ಉತ್ತರಾಭಿಮುಖವಾಗಿ ಚಲಿಸಿ ರಿ.ಸ.ನಂ.141ರ ದಕ್ಷಿಣಗಡಿಯಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸಿ ನಂತರ ಇದೇ ರಿ.ಸ.ನಂ.141, 142, 143, 144, 145 ಹಾಗೂ 147ರ ಪಶ್ಚಿಮ ಗಡಿಗಳಲ್ಲಿ ಉತ್ತರಾಭಿಮುಖವಾಗಿ ಚಲಿಸಿ ಶಿವಮೊಗ್ಗ ರಸ್ತೆಯನ್ನು ದಾಟಿಕೊಂಡು ಶಿವಮೊಗ್ಗ ರಸ್ತೆಯ ಉತ್ತರ ಅಂಚಿನಲ್ಲಿ ಪೂರ್ವಾಭಿಮುಖವಾಗಿ ಚಲಿಸಿ ಪ್ರಾರಂಭದ ಬಿಂದುವನ್ನು ತಲುಪುತ್ತದೆ.

**ಎಂ.ಎಂ. ಹಿರೇಮಠ**

ಪಿ.ಆರ್.523 ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಸಹಕಾರ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ:ಸಇ 210 ಎಂಆರ್‌ಇ 2011, ಬೆಂಗಳೂರು, ದಿನಾಂಕ:24.06.2011

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 11(1)(ix) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಹೊಸಪೇಟೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿದೆ:

| ಕ್ರ. ಸಂ. | ಸದಸ್ಯರ ಹೆಸರು ಶ್ರೀಯುತರು/ ಶ್ರೀಮತಿ |
|---|---|
| 1. | ಕುರಿಜಡೇಪ್ಪ ತಂದೆ ಕುರಿಮೊಳ್ಳಪ್ಪ, ದೇವಲಾಪುರ ಗ್ರಾಮ, ಹೊಸಪೇಟೆ ತಾಲ್ಲೂಕು. |
| 2. | ಹನುಮಂತಪ್ಪ ತಂದೆ ಜಿ. ಈರಣ್ಣ, ಮಾವಿನಹಳ್ಳಿ ಗ್ರಾಮ, ಹೊಸಪೇಟೆ ತಾಲ್ಲೂಕು. |
| 3. | ಇಟಗಿ ಬಸಪ್ಪ ತಂದೆ ಜಿ. ಪಂಪಣ್ಣ, ಹಂಪಾದೇವನಹಳ್ಳಿ ಗ್ರಾಮ, ಹೊಸಪೇಟೆ ತಾಲ್ಲೂಕು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಕೆ. ವಾಸುದೇವ ಮೂರ್ತಿ**

ಪಿ.ಆರ್.688 ಸರ್ಕಾರದ ಅಧೀನ ಕಾರ್ಯದರ್ಶಿ–1,

ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ:ಸಇ 34 ಎಂಆರ್‌ಇ (2) 2011, ಬೆಂಗಳೂರು, ದಿನಾಂಕ:24.06.2011

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 9(2) ರಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ: ಸಇ 34 ಎಂಆರ್‌ಇ (1)2010 ದಿನಾಂಕ:24.06.2011ರಲ್ಲಿ ಸಂಯೋಜನೆ ಮೇರೆಗೆ ರಚಿತವಾದ ಶೃಂಗೇರಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಹೆಸರನ್ನು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಶೃಂಗೇರಿ ಎಂದು ಹಾಗೂ ಅದರ ಕೇಂದ್ರವನ್ನು ಕೊಪ್ಪದಲ್ಲಿ ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಕೆ. ವಾಸುದೇವ ಮೂರ್ತಿ**

ಪಿ.ಆರ್.689 ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

**ಆರ್ಥಿಕ ಸಚಿವಾಲಯ**

**ಅಧಿಸೂಚನೆ ಸಂಖ್ಯೆ:ಆಇ 581 ವೆಚ್ಚ–12/11, ಬೆಂಗಳೂರು, ದಿನಾಂಕ:23.06.2011**

ವಿತ್ತೀಯ ಕಾರ್ಯನೀತಿ ಸಂಸ್ಥೆಯಲ್ಲಿ ಉಪಾಹಾರ ಮಂದಿರ ಸ್ಥಾಪಿಸುವ ನಿಟ್ಟಿನಲ್ಲಿ ಸಲಹೆಯನ್ನು ಪಡೆಯಲು ಇನ್ಸ್‌ಟಿಟ್ಯೂಟ್ ಆಫ್ ಹೋಟೆಲ್ ಮ್ಯಾನೇಜ್‌ಮೆಂಟ್, ಬೆಂಗಳೂರು (ಕೇಂದ್ರ ಸರ್ಕಾರದ ಸಂಸ್ಥೆ) ಸಂಸ್ಥೆಯನ್ನು ರೂ.20.00 ಲಕ್ಷಗಳ ಮೊತ್ತದಲ್ಲಿ ಒಂದು ವರ್ಷದ ಅವಧಿಗೆ ಸಲಹೆಗಾರರನ್ನಾಗಿ ನೇಮಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಆರ್ಥಿಕ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಆರ್ಥಿಕ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಡಿ. ಮಧುಚಂದ್ರ ತೇಜಸ್ವಿ**

ಪಿ.ಆರ್.690

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಸಹಕಾರ ಸಚಿವಾಲಯ**

**ಅಧಿಸೂಚನೆ ಸಂಖ್ಯೆ:ಸಇ 205 ಎಂಆರ್‌ಇ 2011, ಬೆಂಗಳೂರು, ದಿನಾಂಕ:22.06.2011**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 11(1)(ix) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಬಳ್ಳಾರಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿದೆ:

| ಕ್ರ. ಸಂ. | ಸದಸ್ಯರ ಹೆಸರು ಶ್ರೀಯುತರು/ ಶ್ರೀಮತಿ |
|---|---|
| 1. | ಬಿ.ಎನ್. ಚಂದ್ರಶೇಖರ್ ತಂದೆ ಈರಣ್ಣ, ಸೋಮಸಮುದ್ರ ಗ್ರಾಮ, ಬಳ್ಳಾರಿ ತಾಲ್ಲೂಕು. |
| 2. | ಟಿ. ಸೂರಿಬಾಬು ತಂದೆ ಟಿ. ತಾತರಾವು, ತಿಲಕ್‌ನಗರ, ಬಳ್ಳಾರಿ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಕೆ. ವಾಸುದೇವ ಮೂರ್ತಿ**

ಪಿ.ಆರ್.693

ಸರ್ಕಾರದ ಅಧೀನ ಕಾರ್ಯದರ್ಶಿ–1,

ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಸಂಖ್ಯೆ:ಸಇ 206 ಎಂಆರ್‌ಇ 2011, ಬೆಂಗಳೂರು, ದಿನಾಂಕ:23.06.2011**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 11(1)(ix) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಕೆ.ಆರ್.ನಗರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿದೆ:

| ಕ್ರ. ಸಂ. | ಸದಸ್ಯರ ಹೆಸರು ಶ್ರೀಯುತರು/ ಶ್ರೀಮತಿ |
|---|---|
| 1. | ಆನಂದ ಬಿನ್ ಸೋಮಪ್ಪ, ಎಲೆಮುದ್ದೇನಹಳ್ಳಿ, ಮಿರ್ಲೆ ಹೋಬಳಿ, ಕೆ.ಆರ್.ನಗರ ತಾಲ್ಲೂಕು, ಮೈಸೂರು ಜಿಲ್ಲೆ. |
| 2. | ಎಂ.ಎಸ್. ಮಹದೇವ ಬಿನ್ ಸಿದ್ಧಯ್ಯ, ಮಾರಗೌಡನಹಳ್ಳಿ, ಹೊಸ ಅಗ್ರಹಾರ ಹೋಬಳಿ, ಕೆ.ಆರ್.ನಗರ ತಾಲ್ಲೂಕು, ಮೈಸೂರು ಜಿಲ್ಲೆ. |
| 3. | ಹೆಚ್.ಕೆ. ಲೀಲಾವತಿ ಕೋಂ ಶಿವಣ್ಣ, ಕೊಗಿಲೂರು, ಹೊಸಕೋಟೆ ಅಂಚೆ, ಚುಂಚನಕಟ್ಟೆ ಹೋಬಳಿ, ಕೆ.ಆರ್.ನಗರ ತಾಲ್ಲೂಕು, ಮೈಸೂರು ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಕೆ. ವಾಸುದೇವ ಮೂರ್ತಿ**

ಪಿ.ಆರ್.696

ಸರ್ಕಾರದ ಅಧೀನ ಕಾರ್ಯದರ್ಶಿ–1,

ಸಹಕಾರ ಇಲಾಖೆ.

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 125 ಎಂಎಲ್ಆರ್ 2008 (ಎ–2), ಬೆಂಗಳೂರು, ದಿನಾಂಕ:02.07.2011**

ಕರ್ನಾಟಕ ಪುರಸಭೆ ಕಾಯ್ದೆ 1964ರ ಪ್ರಕರಣ 11(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಚಿಕ್ಕಮಗಳೂರು ನಗರಸಭೆಗೆ ಸರ್ಕಾರವು ಅಧಿಸೂಚನೆ ಸಂಖ್ಯೆ: ನಅಇ 125 ಎಂಎಲ್ಆರ್ 2008 (ಎ–2) ದಿನಾಂಕ:11.12.2008 ರಲ್ಲಿ 5 ಜನರನ್ನು ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿ ಹೊರಡಿಸಿರುವ ಆದೇಶವನ್ನು ಭಾಗಶಃ ಮಾರ್ಪಡಿಸಿ "ಕ್ರಮ ಸಂಖ್ಯೆ:2 ರಲ್ಲಿರುವ ಶ್ರೀ ಸುರೇಶ್ ಬಿನ್ ಸಣ್ಣಲಿಂಗಪ್ಪ, ಎರೋಸ್ ಡ್ರೈಕ್ಲೀನಿಕ್, ಆದಿಬೂತಪ್ಪ ದೇವಸ್ಥಾನದ ಮುಂಭಾಗದ ರಸ್ತೆ, ವಿಜಯಪುರ, ಚಿಕ್ಕಮಗಳೂರು, ಕ್ರಮ ಸಂಖ್ಯೆ 3ರಲ್ಲಿರುವ ಶ್ರೀ ಲಕ್ಷ್ಮೀಕಾಂತ ಬಿನ್ ಟಿ. ತಿಮ್ಮಣ್ಣ, ಅಧ್ಯಕ್ಷರು, ಜಿಲ್ಲಾ ಸವಿತಾ ಸಮಾಜ, ಜೈನ್ ಟೆಂಪಲ್ ರಸ್ತೆ, ಚಿಕ್ಕಮಗಳೂರು, ಗೌಡ ದಿದ್ದಿ, ಸಾ: ಸಿಂಧನೂರು ಹಾಗೂ ಕ್ರಮ ಸಂಖ್ಯೆ 4ರಲ್ಲಿರುವ ಶ್ರೀ ಎನ್.ಸಿ. ಗೌತಂಚಂದ್ ಬಿನ್ ನಂದಾರಾಮ್ ಚೋಗಾಲಾಲ್, ಎಂ.ಜಿ.ರಸ್ತೆ, ಚಿಕ್ಕಮಗಳೂರು" ಇವರುಗಳ ಬದಲಿಗೆ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ:

1) ಶ್ರೀ ಸಗಾಯಿದಾಸ್, ಬಿನ್ ಎ. ಜಾರ್ಜ್, ರಹೀಮ್ ಬಿಲ್ಡಿಂಗ್, ಉಪ್ಪಳ್ಳಿ, ಚಿಕ್ಕಮಗಳೂರು.
2) ಶ್ರೀ ಯಶೋಧರರಾಜ್ ಅರಸ್, ಬಿನ್ ಲೇ. ಕುಮಾರಾಜ್ ಅರಸ್, ಗವನಹಳ್ಳಿ, ರಾಂಪುರ, ಚಿಕ್ಕಮಗಳೂರು.
3) ಶ್ರೀ ವೆಂಕಟೇಶ್ ಸಿ. ಬಿನ್ ಚಿನ್ನಪ್ಪ, ಬ್ಯೂಟಿಹೇರ್ ಸ್ಟೈಲ್, ನೆಹರು ರಸ್ತೆ, ಚಿಕ್ಕಮಗಳೂರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಆರ್. ರವೀಂದ್ರ**

ಪಿ.ಆರ್.702

ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 40 ಸಿಎನ್ಎಸ್ 2011, ಬೆಂಗಳೂರು, ದಿನಾಂಕ:24.06.2011**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11) ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಯಾದಗಿರಿ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಹಾಗೂ ಯಾದಗಿರಿ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ. ಯಾದಗಿರಿ, ಯಾದಗಿರಿ ಜಿಲ್ಲೆ ಇವುಗಳ ಆಡಳಿತ ಮಂಡಳಿಗಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

**ಯಾದಗಿರಿ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ.,**

1) ಶ್ರೀ ಚನ್ನಯ್ಯ ಬಿನ್ ಮೂತ್ಯಾಪ್ಪ, ಮಾಳಿಕೇರಿ, ಅಂಬೇಡ್ಕರ್ ನಗರ, ಯಾದಗಿರಿ.

**ಯಾದಗಿರಿ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ.**

1) ಶ್ರೀ ನಾಗರೆಡ್ಡಿ ಬಿನ್ ಹನುಮಂತರಾಯ, ದುಬಾಯ್ ಅಂಚೆ, ಮುನಗಲ್, ಯಾದಗಿರಿ ತಾಲ್ಲೂಕು.
2) ಶ್ರೀ ವಿಜಯಕುಮಾರ ಬಿನ್ ಮೋತಿಲಾಲ್ ರಾಥೋಡ್, ಶಾ: ಬಾಲಾಜಿನಗರ (ಬಸವಂತಪುರ) ಠಣಗುಂಡಿ, ಯಾದಗಿರಿ ತಾಲ್ಲೂಕು ಮತ್ತು ಜಿಲ್ಲೆ.
3) ಶ್ರೀಮತಿ ಶ್ರೀದೇವಿ ಕೋಂ ವಿಜಯಕುಮಾರ್ ಕೋಲಿವಾಡ ಸಾ: ಯಾದಗಿರಿ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ಪಿ.ಆರ್.711

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 33 ಸಿಎನ್ಎಸ್ 2010, ಬೆಂಗಳೂರು, ದಿನಾಂಕ:29.06.2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ 33 ಸಿಎನ್ಎಸ್ 2010, ದಿನಾಂಕ:25.03.2010ರಲ್ಲಿ ಧಾರವಾಡ ಜಿಲ್ಲೆ ಹುಬ್ಬಳ್ಳಿ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಹುಬ್ಬಳ್ಳಿ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಮಲ್ಲಯ್ಯ ಅಂದಾನಯ್ಯ ಪೂಜಾರ ಸಾ:ಬ್ಯಾಹಟ್ಟಿ, ತಾ: ಹುಬ್ಬಳ್ಳಿ ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಭೀಮನಗೌಡ ಕೆಂಚನಗೌಡ ಕೆಂಪಲಿಂಗನಗೌಡ್ರ ಸಾ: ಹಳ್ಯಾಳ, ತಾ: ಹುಬ್ಬಳ್ಳಿ ಇವರನ್ನು ಹುಬ್ಬಳ್ಳಿ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಹುಬ್ಬಳ್ಳಿ, ಧಾರವಾಡ ಜಿಲ್ಲೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ಪಿ.ಆರ್.712

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಸಿಒ 42 ಸಿಎಸ್‌ಎಸ್ 2011, ಬೆಂಗಳೂರು, ದಿನಾಂಕ:29.06.2011

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಶಹಪೂರ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಹಾಗೂ ಶಹಪೂರ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಶಹಪೂರ, ಯಾದಗಿರಿ ಜಿಲ್ಲೆ ಇವುಗಳ ಆಡಳಿತ ಮಂಡಳಿಗಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

**ಶಹಪೂರ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ.,**

1) ಶ್ರೀ ಮಲ್ಲಿಕಾರ್ಜುನ ಬಿನ್ ಸಂಗಪ್ಪ, ಮುದ್ದನೂರು, ಜಾಲಗಾರ ಓಣಿ, ಶಹಪೂರ, ಯಾದಗಿರಿ ಜಿಲ್ಲೆ.

**ಶಹಪೂರ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ.,**

1) ಶ್ರೀ ಸಾಹೇಬಗೌಡ ಬಿನ್ ಗುರಪ್ಪ ಬಿಳಾರ, ಸಾ: ಗೋಗಿ, ಕೆ. ಶಹಪೂರ, ಯಾದಗಿರಿ ಜಿಲ್ಲೆ.
2) ಶ್ರೀಮತಿ ಶಿವಮ್ಮ ಬಿನ್ ಮರಿಯಮ್ಮ, ಸಾ: ಹಯ್ಯಾಳ, ಶಹಪೂರ, ಯಾದಗಿರಿ ಜಿಲ್ಲೆ.
3) ಶ್ರೀ ಹುಲೇಪ್ಪ ಬಿನ್ ಸಾಯಿಬಣ್ಣ ಚಿಕ್ಕಮೇಟಿ ಅಂಚೆ, ಗುಲ್ಸರಂ, ಶಹಪೂರ ತಾಲ್ಲೂಕು, ಯಾದಗಿರಿ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ಪಿ.ಆರ್.713

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

## FOREST, ENVIRONMENT AND ECOLOGY SECRETARIAT

## NOTIFICATION

### No.FEE 36 EPC 2010, Bangalore, Dated:02.07.2011

In continuation to Government Notification No.FEE 36 EPC 2010, Dated:30.04.2011 and in exercise of powers conferred under Section 28 of the Water (Prevention & Control of Pollution) Act, 1974 & Under Section 31 of the Air (Prevention & Control of Pollution) Act, 1981, Government hereby extends the term of office of Mr. Justice A.M. Farooq, Retired Judge of High court of Karnataka, as Chairman, Karnataka State Appellate Authority, Bangalore by one year with effect from 01.07.2011.

The terms & conditions shall remain the same as per Government Order No. FEE 97 EPC 2006, Dated:23.07.2008.

By Order and in the name of the Governor of Karnataka,

**B. MANOHAR**

PR-718

Under Secretary to Government,
(Ecology & Environment)
Forest, Environment and Ecology Department.

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಾರಿಇ 08 ಸಾಇನಿ 2011, ಬೆಂಗಳೂರು, ದಿನಾಂಕ:06.07.2011**

ಕರ್ನಾಟಕ ಮೋಟಾರು ವಾಹನ ತೆರಿಗೆ ಅಧಿನಿಯಮ 1957 (ಕರ್ನಾಟಕ ಅಧಿನಿಯಮ 35/1957)ರ ಸೆಕ್ಷನ್ 16(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಾರ್ವಜನಿಕ ಹಿತಾಸಕ್ತಿಯಿಂದ ಈ ರೀತಿ ಆದೇಶಿಸುವ ಅವಶ್ಯವಿದೆಯೆಂದು ಅಭಿಪ್ರಾಯ ತಳೆದು ಈ ಕೆಳಕಂಡ ಸಂಸ್ಥೆಗಳು ಹೊಂದಿರುವ ವಾಹನಗಳಿಗೆ ಮೋಟಾರು ವಾಹನ ತೆರಿಗೆ ಪಾವತಿಯಿಂದ ವಿನಾಯಿತಿ ನೀಡಲಾಗಿದೆ.

| ಕ್ರ. ಸಂ. | ಸಂಸ್ಥೆಯ ಹೆಸರು | ವಾಹನ ಸಂಖ್ಯೆ | ಸಂಸ್ಥೆಯ/ ವಾಹನಗಳ ಉದ್ದೇಶ | ನೀಡಲಾದ ತೆರಿಗೆ ವಿನಾಯಿತಿ |
|---|---|---|---|---|
| 1. | ಕ್ರೈಸ್ತ ಮಿತ್ರ ಆಶ್ರಮ ಅಂಕೋಲಾ, ಉತ್ತರ ಕನ್ನಡ ಜಿಲ್ಲೆ. | ಟಾಟಾ ವಿಂಗರ್ ವಾಹನ ಸಂಖ್ಯೆ: ಕೆಎ25/ಟಿವಿ–2201 | ಈ ಸಂಸ್ಥೆಯು ಧಾರ್ಮಿಕ ಸಂಸ್ಥೆಯಾಗಿದ್ದು ಯಾವುದೇ ಲಾಭದ ಉದ್ದೇಶವಿಲ್ಲದೆ ಪರಿಶಿಷ್ಟ ಜಾತಿ/ ಪಂಗಡ ಹಾಗೂ ಹಿಂದುಳಿದ ಬಡ ಜನರ ಸಾಮಾಜಿಕ ಸೇವಾ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದೆ. | ಗರಿಷ್ಠ ರೂ.25,000/–ಗಳ ವಾರ್ಷಿಕ ತೆರಿಗೆ ವಿನಾಯಿತಿ ನೀಡಲಾಗಿದೆ. |
| 2. | ಶ್ರೀ ವಿದ್ಯಾಪ್ರಸನ್ನ ತೀರ್ಥ ಸ್ವಾಮೀಜಿ, ಶ್ರೀ ಸುಬ್ರಹ್ಮಣ್ಯ ಮಠ, ಸುಬ್ರಹ್ಮಣ್ಯ, ದಕ್ಷಿಣ ಕನ್ನಡ ಜಿಲ್ಲೆ. | ಟೆಂಪೋ ಟ್ರಾವೆಲರ್ ವಾಹನ ಸಂಖ್ಯೆ: ಕೆಎ–21–ಎನ್–76 | ಈ ಸಂಸ್ಥೆಯು ಜಾತ್ಯತೀತವಾಗಿ ಸಮಾಜದಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಸೇವೆಯನ್ನು ಮಾಡುತ್ತಿದೆ. | ಕನಿಷ್ಠ ಮೊತ್ತವಾದ ರೂ.5,000/–ಗಳ ತೆರಿಗೆ ವಿನಾಯಿತಿ ನೀಡಲಾಗಿದೆ. |

ಸದರಿ ಸಂಸ್ಥೆಗಳ ನೊಂದಾಯಿತ ವಾಹನಗಳ ತೆರಿಗೆ ವಿನಾಯಿತಿಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1) ವಾಹನದ ಮಾಲೀಕತ್ವ ಬದಲಾವಣೆಯಲ್ಲಿ ತೆರಿಗೆ ವಿನಾಯಿತಿಯು ರದ್ದುಗೊಳ್ಳುತ್ತದೆ.

2) ಯಾವ ಉದ್ದೇಶಕ್ಕಾಗಿ ತೆರಿಗೆ ವಿನಾಯಿತಿ ನೀಡಲಾಗಿದೆಯೋ ಆ ಉದ್ದೇಶ ಬದಲಾದಲ್ಲಿ ತೆರಿಗೆ ವಿನಾಯಿತಿಯು ರದ್ದುಗೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾರಿಗೆ ಇಲಾಖೆ.

ಪಿ.ಆರ್.719

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 125 ಬೆಂರೂಪ್ರಾ 2011, ಬೆಂಗಳೂರು, ದಿನಾಂಕ:09.06.2011**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987ರ ಪ್ರಕರಣ 3(3)(ಎ) ಮತ್ತು (4)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್.ಎನ್. ಶ್ರೀರಾಮ ಬಿನ್ ದಿ: ಶ್ರೀ ನಾರಾಯಣಗೌಡ, ಶೆಟ್ಟಿಹಳ್ಳಿ ಗ್ರಾಮ, ಮಡಿಹಾಳ ಅಂಚೆ, ವೇಮಗಲ್ ಹೋಬಳಿ, ಕೋಲಾರ ತಾಲ್ಲೂಕು ಮತ್ತು ಜಿಲ್ಲೆ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಅಥವಾ ಸರ್ಕಾರದ ಇಚ್ಛಾನುಸಾರ ಕೋಲಾರ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ನಾಮ ನಿರ್ದೇಶನ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

ಪಿ.ಆರ್.721